# ಕಾನನ

JUNE 2013

ನಿಸರ್ಗದೆಡೆಗೆ ಪಯಣ

* ಬಾವಿ ಕಪ್ಪೆ ಸಮುದ್ರ ಕಪ್ಪೆ
* ಬುಗರಿಕಲ್ ಭಾಗ - ೨
* ಹಕ್ಕಿಲೋಕ
* ಹೋರಾಟ
* ವಿ ವಿ ಅಂಕಣ
* ತೋಟದ ಮನೆಯ ಹಕ್ಕಿಯ ಗೂಡು (ಕವನ)



ಸಂಪಾದಕರು : ಅಶ್ವಥ ಕೆ.ಎನ್ ವಿನ್ಯಾಸ : ನಾಗೇಶ್ ಓ.ಎಸ್

ಲೇಖಕ ವೃಂದ : ಸ್ವಾಮಿ ಸೌಖ್ಯಾನಂದಜೀ ಮಹಾರಾಜ್, ನಾಗೇಶ್.ಓ.ಎಸ್, ಅಶ್ವಥ.ಕೆ.ಎನ್, ಅನಿತಾ ನರೇಶ ಮಂಚಿ, ಶಂಕರಪ್ಪ.ಕೆ.ಪಿ, ಕೃಷ್ಣ ನಾಯಕ್,

ಕರಡು ತಿದ್ದುಪಡಿ : ಮುರಳಿ.ಎಸ್ ಮುಖಪುಟ ಛಾಯಚಿತ್ರ : ದೀಪಕ್ ಜಿ.ಎನ್

ಮುಖಪುಟ : ನವಿಲು

E-mail : kaanana.mag@gmail.com

THINK·EAT·SAVE
REDUCE YOUR FOODPRINT

# ಸಂಪಾದಕೀಯ

ನಮ್ಮ ರಾಜಧಾನಿ ಬೆಂಗಳೂರು ನಗರದ ಜನಸಂಖ್ಯೆ ಒಂದು ಕೋಟಿ. ಇಡೀ ರಾಜ್ಯದ 1/6 ಭಾಗದ ಜನ ಬೆಂಗಳೂರು ನಗರದಲ್ಲಿದ್ದಾರೆ. ಅವರಿಗೆ ಬೇಕಾದ ನೀರು ನೂರಾರು ಕಿಲೋ ಮೀಟರ್ ನಿಂದ ತರಬೇಕು, ತಿನ್ನಲು ಕೊತ್ತಂಬರಿ ಸೊಪ್ಪಿನಿಂದ ಹಿಡಿದು ಸೌತೆಕಾಯಿಯವರೆಗೂ ಹಳ್ಳಿಗಳ ಜನ ಬೆಳೆದು ಕೊಡಬೇಕು.

ನಗರದಲ್ಲಿ ನೀರಿಲ್ಲದಿದ್ದರೆ ಕೋಟಿ ಕೋಟಿ ರೂಪಾಯಿ ಅನುಧಾನ ಬಿಡುಗಡೆ, ಬಹಳ ಮುಂಜಾಗ್ರತೆ ! ಅದೇ ಕಾಡಿನಲ್ಲಿ ಪ್ರಾಣಿಗಳು ನೀರಿಲ್ಲದೆ ಸಾಯುತ್ತಿದ್ದರೆ ಅವಕ್ಕೆ ಕೃತಕವಾಗಿ ನೀರು ಸರಬರಾಜು ಮಾಡಬಾರದು. ಮಾಡಿದರೆ ಅವುಗಳ ಸ್ವಾಭಾವಿಕತೆಗೆ ದಕ್ಕೆ ಉಂಟಾಗುತ್ತದೆ ಎಂಬ ಕುಹಕ.

ನೀರು ನಲ್ಲಿಯಿಂದ ಬರೋದು, ಅದರ ಮೂಲ ಕಾಡಿನದಲ್ಲ, ಇತರೆ ಜೀವಿಗಳಿಗೆ ಸಂಬಂಧಿಸಿದ್ದಲ್ಲ ಎಂಬ ತಾತ್ಸಾರ ಮನೋಭಾವ ಇತ್ತೀಚೆಗೆ ಜನಗಳಲ್ಲಿ ಮೂಡಿರುವುದು ಸರಿಯಿಲ್ಲ! ಹಾಲು ಡೈರಿಯಿಂದ ಬರುತ್ತದೆ ಎಂದು ತಿಳಿದು ನಿಸರ್ಗದಿಂದ ದೂರವಿದ್ದು ಬೆಳೆಯುತ್ತಿರುವ ನಮ್ಮ ಮಕ್ಕಳು ಮುಂದೊಂದು ದಿನ ನೀರಿಗಾಗಿ, ಅನ್ನಕ್ಕಾಗಿ, ಪರೆದಾಡುವ ಭವಿಷ್ಯವನ್ನ ನೆನೆದರೆ ನಿಜವಾಗಲೂ ನಮಗೆ ನೋವಾಗುತ್ತದೆ. ನಮ್ಮ ಮತ್ತು ನಿಸರ್ಗದ ನಡುವೆ ಅವಿನಾಭಾವ ಸಂಬಂಧ ಮರೆತುದ್ದಾದರೂ ಹೇಗೆ? ಎಂದು ಕರುಳು ಹಿಚುಕಿದಂತಾಗುತ್ತದೆ. ಈ ಭೂಮಿ ಇಂದು ನಮಗೆ ಭೂಮಿತಾಯಿಯಾಗಿ ಕಾಣುತ್ತಿಲ್ಲ, ಹಲವರಿಗಿದು ಬರಿ ಮಣ್ಣು!, ನೀರನ್ನು ಕಳಶದಲ್ಲಿಟ್ಟು ಗಂಗೆಯಂತೆ ಪೂಜಿಸಿದವರು ನಾವು, ಇಂದು ಕಳಶವೂ ಇಲ್ಲ, ನೀರು ಇಲ್ಲ !!

ನಿತ್ಯ ಜೀವನದಲ್ಲಿ ಎಲ್ಲವುದಕ್ಕೂ ಈ ನಮ್ಮ ನಿಸರ್ಗವನ್ನೇ ಅವಲಂಭಿಸಿರುವ ನಾವು, ಜೂನ್ ಐದು *"ವಿಶ್ವ ಪರಿಸರ ದಿನ"* ವನ್ನು ಬರಿ ಗಿಡನೆಟ್ಟು ಫೋಟೋ ತೆಗೆದು ಫೇಸ್ ಬುಕ್ ನಲ್ಲಿ ಅಪ್ಲೋಡ್ ಮಾಡಿ ಮುಗಿಸುತ್ತಿರುವ ನಾವು! ಕಾಡು-ಮೇಡುಗಳನ್ನು ಉಳಿಸುವ ಪ್ರಯತ್ನವನ್ನೇ ಮರೆತ್ತಿದ್ದೇವೆ.

**ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.**

Wildlife Conservation Group



# ಆಧ್ಯಾತ್ಮದಲ್ಲಿ ವನ್ಯಜೀವಿಗಳು

## ಶ್ರೀ ರಾಮಕೃಷ್ಣರ ಉಪದೇಶಗಳಲ್ಲಿ ಪ್ರಾಣಿಪಕ್ಷಿಗಳು

### * ಬಾವಿ ಕಪ್ಪೆ ಸಮುದ್ರ ಕಪ್ಪೆ



ನಮ್ಮ ಹಿರಿಯರು ಹೇಳಿದ್ದಾರೆ, ದೇಶ ತಿರುಗು ಇಲ್ಲಾ ಕೋಶ ಓದು. ನಾವು ನಮ್ಮ ಜೀವನದಲ್ಲಿ ಜ್ಞಾನಪಡೆಯಬೇಕಾದರೆ ದೇಶ ತಿರುಗಬೇಕು ನಾನಾ ರೀತಿ ಅನುಭವ ಪಡೆಯಬೇಕು, ಇಲ್ಲಾ ಇಂತಹ ಜ್ಞಾನಿಗಳು ಹಿರಿಯರು ಪಡೆದ ಜ್ಞಾನವನ್ನು ಓದಿ ತಿಳಿದು ನಮ್ಮ ಜ್ಞಾನವನ್ನು ಹೆಚ್ಚಿಸಿ ಕೊಳ್ಳಬೇಕು. ಇಲ್ಲದ್ದಿದ್ದರೆ ನಮ್ಮ ಜ್ಞಾನ ಬೆಳೆಯಲು ಸಾಧ್ಯವಿಲ್ಲ. ನಾವು ಅಜ್ಞಾನಿಗಳಾಗಿ ನಾವಿರುವ ಸ್ಥಿತಿಯೇ ಶ್ರೇಷ್ಠ, ನಾವು ತಿಳಿದಿರುವ ಜಗತ್ತೇ ಜಗತ್ತು, ಅದಕ್ಕಿಂತ ಹೆಚ್ಚಿನದು ಈ ಜಗತ್ತಿನಲ್ಲಿ ಇಲ್ಲ ಎಂದು ತಿಳಿದು ಅಜ್ಞಾನದಲ್ಲಿರುತ್ತೇವೆ. ತಿಳಿದವರು ಹೇಳಿದರೂ ಸಹ ಅದರಲ್ಲಿ ಶ್ರದ್ಧೆ ಇರುವುದಿಲ್ಲ, ಅವರು ಹೇಳುವುದೆಲ್ಲ ಸುಳ್ಳು ಎಂದು ಭಾವಿಸುತ್ತೇವೆ. ಇದನ್ನ ಶ್ರೀ ರಾಮಕೃಷ್ಣರು ಬಹಳ ಸುಂದರವಾಗಿ ಬಾವಿ ಕಪ್ಪೆ ಸಮುದ್ರ ಕಪ್ಪೆ ಯ ಉದಾಹರಣೆ ಮೂಲಕ ತಿಳಿಸಿದ್ದಾರೆ.

ಒಂದು ಕಪ್ಪೆ ಬಾವಿಯಲ್ಲಿತ್ತು, ಅದು ಅಲ್ಲೇ ಬಹಳ ಕಾಲದಿಂದ ವಾಸಿಸುತ್ತಿತ್ತು, ಅದು ಅಲ್ಲೇ ಹುಟ್ಟಿ ಬೆಳೆದ ಒಂದು ಪುಟ್ಟ ಕಪ್ಪೆ, ಒಂದು ದಿನ ಸಮುದ್ರದಿಂದ ಒಂದು ಕಪ್ಪೆ ಅಲ್ಲಿಗೆ ಬಂತು, ಬಾವಿಯಲ್ಲಿದ್ದ ಕಪ್ಪೆ ಈ ಸಮುದ್ರ ಕಪ್ಪೆಯನ್ನ " ನೀನು ಎಲ್ಲಿಂದ ಬಂದೆ ?"ಎಂದು ಕೇಳಿತು.

ಸಮುದ್ರ ಕಪ್ಪೆಯು ಸಮುದ್ರದಿಂದ ಎಂದಿತು, ಆಗ ಬಾವಿ ಕಪ್ಪೆಯು ಸಮುದ್ರ ಎಷ್ಟು ದೊಡ್ಡದು? ಎಂದು ಕೇಳಿತು. ಅದಕ್ಕೆ ಸಮುದ್ರಕಪ್ಪೆಯು " ಸಮುದ್ರ ತುಂಬಾ ದೊಡ್ಡದು " ಎಂದಿತು. ಅಗ ಬಾವಿ ಕಪ್ಪೆಯು ತನ್ನ ಎರಡೂ ಕಾಲುಗಳನ್ನ ಅಗಲವಾಗಿ ಚಾಚಿ ಇಷ್ಟು ದೊಡ್ಡದಾಗಿದೆಯೇ ನಿನ್ನ ಸಮುದ್ರ ಎಂದಿತು. ಅಗ ಸಮುದ್ರ ಕಪ್ಪೆಯು "ಇಲ್ಲ ಇನ್ನೂ ತುಂಬಾ ದೊಡ್ಡದು" ಎಂದಿತು. ಆಗ ಬಾವಿ ಕಪ್ಪೆಯು ಒಂದು ಕಡೆಯಿಂದ ಇನ್ನೊಂದು ಕಡೆಗೆ ನೆಗೆದಾಡಿ "ಈ ನನ್ನ ಬಾವಿಯಷ್ಟು ದೊಡ್ಡದೇ ನಿನ್ನ ಸಮುದ್ರ" ಎಂದು ಮರುಪ್ರಶ್ನೆ ಯನ್ನು ಕೇಳಿತು.

ಆಗ ಸಮುದ್ರ ಕಪ್ಪೆಯು ಬಾವಿ ಕಪ್ಪೆಗೆ "ಓ ನನ್ನ ಸ್ನೇಹಿತನೇ ಸಮುದ್ರವನ್ನು ನಿನ್ನ ಬಾವಿಯೊಂದಿಗೆ ಹೇಗೆ ಹೋಲಿಸುವುದು ಎಂದು ಕೇಳಿತು, ಆಗ ಬಾವಿ ಕಪ್ಪೆಯು " ನನ್ನ ಬಾವಿಗಿಂತ ಯಾವುದೂ ದೊಡ್ಡವಾಗಿರದು, ಈ ಸಮುದ್ರದ ಕಪ್ಪೆ ಸುಳ್ಳುಗಾರ ಇವನನ್ನು ಆಚೆಗೆ ತಳ್ಳಬೇಕು ಎಂದಿತು.

ಅಲ್ಪ ಮನುಷ್ಯರ ಮನಸ್ಸು ಇದರಂತೆ ತನ್ನ ಕಿರಿದಾದ ಬಾವಿಯಲ್ಲಿದ್ದುಕೊಂಡು ಪ್ರಪಂಚದಲ್ಲಿ ಇದನ್ನು ಮೀರಿದ ವಸ್ತುವೇ ಇಲ್ಲ ಎಂದು ಭಾವಿಸಿರುತ್ತಾರೆ.

**ನೀತಿ ಪಾಠ :** "ನಮ್ಮ ಅಲ್ಪತನದಿಂದ ಹೊರಗೆ ಬಂದಾಗಲೇ ನಮ್ಮ ಜ್ಞಾನ ವಿಕಾಸವಾಗುವುದು".



- ಸ್ವಾಮಿ ಸೌಖ್ಯಾನಂದಜೀ ಮಹಾರಾಜ್



# ಬುಗರಿಕಲ್ - 2

ಮುಂದುವರಿದ ಭಾಗ. . . .

ಕ್ಯಾಮೆರಮೆನ್ ಫೋಟೋ ಹಿಡಿಯಲು ರೇಡಿಯಾದರು. ಮೂರ್ನಾಲ್ಕು ಹಂದಿಗಳು ನಮ್ಮನ್ನು ಗಮನಿಸದೆ ತಮ್ಮ ಪಾಡಿಗೆ ತಾವು ಹೊರಟು ಹೋದವು ಆದರೆ ಒಂದು ಹಂದಿಗೆ ನಮ್ಮ ವಾಸನೆ ಸಿಕ್ಕಿತೋ ಏನೋ? ತನ್ನ ಚುಪಾದ ಕೋರೆಗಳನ್ನು ಮುಂದೆ ಮಾಡಿಕೊಂಡು ನಮ್ಮನ್ನು ಗುರಾಯಿಸುತ್ತಾ ಎದುರಿಸಲು ನಮ್ಮ ಕಡೆ ಎರಡು ಹೆಜ್ಜೆ ಇಟ್ಟಿತು. ನಾವು ಕಣ್ಣ ರೆಪ್ಪೆಯನ್ನೂ ಸಹ ಒಡೆಯದಿದ್ದುದನ್ನು ಕಂಡ ಅದಕ್ಕೆ ನಾವು ನಿರ್ಜೀವಿಗಳಂತೆ ಕಂಡೆವೋ ಏನೋ? ತನ್ನ ಪಾಡಿಗೆ ತಾನು ಉಳಿದವುಗಳನ್ನು ಹಿಂಬಾಲಿಸಿತು. ಸುಮಾರು ಇಪ್ಪತ್ತು ಹಂದಿಗಳನ್ನೊಳಗೊಂಡ ತಂಡವು ನಮ್ಮಿಂದ ಕಣ್ಮರೆಯಾದಾಗ ಅಶ್ವಥ್ ರವರು “ಏನ್ ಶಂಕ್ರ ಎಂಗ್ ಬಂದದೆ ಫೋಟೋ! ಆ ಹಂದಿ ನಮ್ಮನ್ನು ಗುರಾಯ್ಸ್ತಾ ರೋದ್ನ ಹಿಡ್ದಿದ್ಯ ತಾನೇ?” ಎಂದಾಗ ತಲೆಕೆರೆದುಕೊಳ್ಳುತ್ತಾ ನಿಧಾನವಾಗಿ ‘ಇ . . . ಅದು ಫೋಟೋ ಏನೋ ತೆಗ್ದೆ ಆದ್ರೆ ಸೆಟ್ಟಿಂಗ್ ಚೇಂಜ್ ಮಾಡ್ ಬಿಟ್ಟಿದ್ದೆ ಸರಿಗ್ ಬಂದಿಲ್ಲ’ ಎಂದುದ್ದಕ್ಕೆ ಉಚಿತ ಬೈಗುಳ ದೊರಕಿತು, ನಮ್ಮ ಕ್ಯಾಮೆರಾಮೆನ್ಗೆ. ಇನ್ನೂ ನಮ್ಮ ದಾರಿ ಮುಕ್ಕಾಲು ಪಾಲು ಇದ್ದುದರಿಂದ ಬಿಸಿಲಿನ ಬೇಗೆ ಹೆಚ್ಚಿ, ಹೊಟ್ಟೆಯಲ್ಲಿ ಹಸಿವು ಹೆಚ್ಚಾಗಿ ಎಲ್ಲರೂ ಬೇಗ ಬೇಗ ಊರಿನ ಕಡೆ ಹೊರಟೆವು. ಬರುವ ದಾರಿಯಲ್ಲಿಯೇ ಹೊಗೆಯಾಡುತ್ತಾ ಇದ್ದ ಆನೆ ಲದ್ದಿಯನ್ನು ಕಂಡು ‘ಲದ್ದಿ ನೋಡುದ್ರೆ ಆನೆ ಇಲ್ಲೇ ಎಲ್ಲೋ ಇರ್ಬೇಕು ಸರೀಗ್ ನೋಡ್ರಪ್ಪ ಮತ್ತೆ ಸಿಕ್ಕಾಕ್ಕೋಬಿಟ್ಟೆವು’ ಎಂದು ಸುತ್ತಲೂ ಕಣ್ ಹಾಯಿಸುತ್ತಾ ಲದ್ದಿಯನ್ನು ಕಾಲಿನಿಂದ ತುಳಿಯ ತೊಡಗಿದರು. ಇವರ ಹೊಸ ಪ್ರಯೋಗದ ಉಪಯೋಗ ತಿಳಿಯದ ನಾನು ‘ಯಾಕ್ ಅಶ್ವಥಣ್ಣ ಅದನ್ಯಾಕೆ ತುಳಿತಿದ್ಯ?’ ಎಂದೆ.






‘ಆನೆಗಳಿಗೆ ಮೂಗು ತುಂಬ ಚುರ್ಕು ಕಣೊ! ನಮ್ಮ ವಾಸನೆ ಅವ್ಕೆ ಬೇಗ ಗೊತ್ತಾಗಿ ಬಿಡುತ್ತೆ, ಅದಕ್ಕೆ ಲದ್ದಿ ತುಳ್ದ್ರೆ ಅದರ ಲದ್ದಿ ವಾಸನೆ ಅದಕ್ಕೆ ತಗಲುತ್ತೆ, ಆಗ ನಾವು ತಪ್ಪಿಸ್ಕೊಳ್ಳಕ್ಕೆ ಟೈಮ್ ಸಿಗುತ್ತೆ’ ಎಂಬ ಉತ್ತರ ಕೇಳಿ ‘ಒಳ್ಳೆಯ ಲಾಜಿಕ್’ ಎಂದು. ನಾವು ಲದ್ದಿಯನ್ನು ತುಳಿದು ನಿಧಾನವಾಗಿ ಸುತ್ತಲೂ ನೋಡುತ್ತಾ ನಡೆಯತೊಡಗಿದೆವು.




ನಾವು ಹೋಗುತ್ತಿದ್ದ ದಾರಿಯಲ್ಲಿಯೇ ಆನೆಗಳ ಹೆಜ್ಜೆಗಳು, ಅವು ಮುರಿದಿದ್ದ ರೆಂಬೆಗಳನ್ನು ಕಂಡು, ನಾವು ಹೋಗಬೇಕಾಗಿರುವ ದಾರಿಯಲ್ಲಿಯೇ ಆನೆಗಳು ಹೋಗಿವೆ ಎಂದು ಮಾತನಾಡಿಕೊಳ್ಳುತ್ತಾ ನಮಗೆ ಸ್ವಲ್ಪ ಪರಿಚಿತ ದಾರಿಯಾದ ದೊಡ್ಡಿ ಬೆಟ್ಟದ ಪಕ್ಕದ ಜೀಪ್ ದಾರಿಗೆ ಬಂದೆವು. ನನಗಂತೂ ಇನ್ನೂ ಯಾವ ಭಯವಿಲ್ಲವೆಂದೆನಿಸಿತು. ಆನೆಯು ಉಸಿರು ಬಿಟ್ಟಾಗ ದಾರಿಯಲ್ಲಿನ ದೂಳು ಪಕ್ಕಕ್ಕೆ ಸರಿದಿದ್ದುದನ್ನು ಕಂಡ ನಾವು ಅದು ಉಸಿರು ಬಿಟ್ಟಿರುವುದರಿಂದ ಹೀಗೆ ಆಗಿರುವುದೋ, ಅಥವಾ ಕಾಲಿನಿಂದ ಒದ್ದಿರುವುದೋ ಎಂದು ನಮಗೆ ತಿಳಿದಿದ್ದ ಫಿಸಿಕ್ಸ್, ಮ್ಯಾಥ್ಸ್ ಪ್ರಕಾರ ವಾದಮಾಡುತ್ತಾ ನಿರ್ಭೀತಿಯಿಂದ ಹೊರಟಿರಬೇಕಾದರೆ ಪಕ್ಕದಲ್ಲಿದ್ದ ಅಶ್ವಥ್ ಒಮ್ಮೆಲೇ ಹಿಂದಕ್ಕೆ ಓಡತೊಡಗಿದರು. ನಾನು ಏನನ್ನೂ ಯೋಚಿಸದೆ ಗುರುವನ್ನು ಹಿಂಬಾಲಿಸಿದೆ. ಅಲ್ಲಿಯೇ ನಿಂತು ನೋಡುತ್ತಿದ್ದ ಶಂಕರಪ್ಪನವರು 'ಏನ್ರೋ. . . . . ಏನ್ರೋ. . . . . ' ಎಂದು ಗಾಬರಿಯಿಂದ ಕೇಳಿದರೂ ಉತ್ತರ ಸಿಗದಿದ್ದಾಗ ಅವರೂ ಓಡಿಬಂದು ನಮ್ಮನ್ನು ಸೇರಿದರು.

'ಲೋ. . . ಆನೆ ಕಣೊ. . . ಪಕ್ಕಕ್ಕೇ ಹೋಗ್ ಬಿಟ್ಟಿದ್ದೊ ನಿಮ್ಗ್ಯಾರ್ಗು ಕಾಣ್ಸಿಲ್ವ ನೋಡ್ ಅಲ್ಲಿ ನಿಂತಿದೆ' ಎಂದು ಏದುಸಿರು ಬಿಡುತ್ತಾ ಆನೆ ಇರುವ ಕಡೆ ಕೈ ತೋರಿಸುತ್ತಾ ಓಡಿದ್ದಕ್ಕೆ ಕಾರಣ ಹೇಳಿದರು ಅಶ್ವಥು. 'ಮತ್ತೆ ಹೇಳ್ದೆ ಓಡ್ ಬಂದ್ಬಿಡೋದ ಇಂಗೆ ತಾನೇ ನಮ್ಮನ್ನ ನೀವು ತಗ್ಲಾಕೋದು'. 'ಅಯ್ಯೋ ಮಾರಾಯ ನಾವೇನು ಇಲ್ಲಿ ಜೂಟಾಟ ಅಡ್ತಿದ್ದೀವ? ಓಡ್ಬಂದ್ರನೆ ತಿಳ್ಕೋ ಬೇಕು ನೀವು!' ಎಂಬ ಅಶ್ವಥ್ ಮಾತಿಗೆ ಶಂಕರಪ್ಪನವರು 'ಸರಿ ಬಿಡ್ರಪ್ಪ' ಎಂದು ಅಸಮಾಧಾನದಿಂದ ಉತ್ತರಿಸಿದರು.

ಎಂದೂ ಆನೆಯನ್ನು ಕಾಡಿನಲ್ಲಿ ಅಷ್ಟು ಹತ್ತಿರದಿಂದ ಕಂಡಿರದ ನನಗೆ, ನಿನ್ನೆ ಮರಿಲಿಂಗಣ್ಣ ಆನೆಗಳ ಕೈಲಿ ಸಿಕ್ಕಿ ಸತ್ತವರ ಘಟನೆಗಳೆಲ್ಲಾ ಒಮ್ಮೆಲೇ ನೆನಪಿಗೆ ಬಂದು ಮೈ ಎಲ್ಲಾ ನಡುಗಿ ಬೆವರಿನಿಂದ ಒದ್ದೆಯಾಯಿತು. ಬೆಳಗಿನಿಂದ ತಿಂಡಿ ಇಲ್ಲದ ಕಾರಣಕ್ಕೆ ಆನೆಯ ಭಯಸೇರಿ ಸುಸ್ತು ಹೆಚ್ಚಾಗಿ ಎಲ್ಲರೂ ಪಕ್ಕದಲ್ಲಿದ್ದ ಕಲ್ಲಿನ ಮೇಲೆ ಕುಳಿತು ತಮ್ಮ ದೇಹ ಮತ್ತು ಮನಸ್ಸನ್ನು ಸ್ವಲ್ಪ ಶಾಂತಿಪಡಿಸಿಕೊಂಡೆವು, ಆನೆಗಳು ಈಗಲೂ ನಮ್ಮನ್ನು ಗಮನಿಸದೆ ತಮ್ಮ ಪಾಡಿಗೆ ತಾವು ನಿಶ್ಚಿಂತೆಯಿಂದ ನಿಂತಿರುವುದನ್ನು ಕಂಡ ನಾವು ಸ್ವಲ್ಪ ಧೈರ್ಯ ಮಾಡಿ ಅವುಗಳಿಂದ ದೂರದಲ್ಲಿರುವ ಕಾಲು ದಾರಿ ಹಿಡಿದು ಹೋಗುವುದೆಂದು ನಿಶ್ಚಯಿಸಿ ಯಾವುದೇ ತೊಂದರೆ ಇಲ್ಲದೆ ಪಾಸ್ ಆದೆವು.




ನಾನು 'ಅಲ್ಲ ಅಶ್ವಥಪ್ಪ ನಾವ್ ಅಷ್ಟು ಹತ್ರಕ್ಕೆ ಹೋದ್ರು ಅದ್ಕೆ ಗೊತ್ತಾಗ್ಲೆ ಇಲ್ವಾ?' ಎಂದೆ. 'ಅದು ಆ ಕಡೆ ತಿರ್ಕೊಂಡು ಸುದಾಸ್ಕೋರ್ತಿತ್ತು.' ಎಂದರು. 'ಸರೀ ಅದ್ರು ಕಡಿಂದ ನಮ್ಕಡೆ ಗಾಳಿ ಬರ್ತಿತ್ತು, ಅದ್ರು ವಾಸನೆ ನಮ್ಗೆ ಬರ್ಲೇ ಇಲ್ಲ ಮತ್ತೆ?' ಎಂದೆ. ' ಅದ್ರು ವಾಸನೆ ನಮ್ಗೆ ಬಂತೋ ಏನೋ ಆನೆ ಲದ್ದಿಗಳನ್ನು ತುಳ್ದು ತುಳ್ದು ನಮ್ಗೆ ಆನೆ ವಾಸನೇನೆ ಗೊತ್ತಾಗ್ಲಿಲ್ಲ!. ನಾವು ಆನೆಗೆ ಬ್ಲಾಕ್ ಮೇಲ್ ಮಾಡಕೋಗಿ ನಾವೇ ಬ್ಲಾಕ್ ಮೇಲ್ ಅಗ್ಬಿಟ್ವಿ' ಎಂದರು ಶಂಕರಪ್ಪನವರು.

ನಮ್ಮ ಕಾಡಿನಲ್ಲಿ ಒಂದೇ ಭೇಟಿಯಲ್ಲಿ ಇಷ್ಟು ಪ್ರಾಣಿಗಳನ್ನು ಕಂಡಿದ್ದು ನಾನು ಆದೇ ಮೊದಲು ಅದೇ ಕೊನೆಯಾಗುತಿತ್ತೇನೊ? ಗಜಾನನನ ದಯೆ! ಹಾಗೆ ಹಾಗಲಿಲ್ಲ.



- ನಾಗೇಶ್ . ಓ . ಎಸ್





# ಹಕ್ಕಿ ಲೋಕ

## ಯಮಧರ್ಮನ ಮಯೂರ

**ವೈಜ್ಞಾನಿಕ ಹೆಸರು : *Pavo cristatus***

**ಇಂಗ್ಲೀಷ್ ಹೆಸರು : Indian Peafowl**

ಉಪ್ಪುನೀರು ಹಳ್ಳ, ಹಾವುಬಂಡೆ ಹಳ್ಳ, ಸುದ್ದಳ್ಳ, ಮಲ್ಲಿಗೆ ಗುಟ್ಟೆ, ಉಪ್ಪಕಬಂಡೆ ಕಡೆ ಎಮ್ಮೆಗಳನ್ನು ಮೇಯುಸುವಾಗ ಯಾವಾವ ಜಾಡಲ್ಲಿ ಕಾಡಂದಿ ತಿರುಗುತ್ತವೆ, ಎಲ್ಲಲ್ಲಿ ಮೊಲಗಳು ಗರಿಕೆ ಮೇಯುತ್ತವೆ, ಯಾವ ಬಿಲದಲ್ಲಿ ಉಡಯಿದೆ ಎಂದು ಸದಾ ತಲಾಸು ತೆಗೆಯುತ್ತಿದ್ದ ಮರಿಗನಿಗೆ ಒಂದು ದಿನ, ಮಲ್ಲಿಗೆ ಗುಟ್ಟೆ ಕೆಳಗೆ ಇರೋ ಹಳ್ಳದ ಹಿಕ್ಕಲಲ್ಲಿ ದಟ್ಟವಾಗಿ ಆಳೆತ್ತರಕ್ಕೆ ಬೆಳೆದಿದ್ದ ಹುಲ್ಲಿನ ಮಧ್ಯದ ಲಂಟನ ಗಿಡದ ಕೆಳಗಿಂದ ಸರಸರ ಸದ್ದು ಕೇಳಿದ್ದೆ ತಡ ಮರಿಗನಿಗೆ ಕಿವಿಗಳು ನಿಮಿರಿ, ಕಣ್ಣುಗಳು ಚಂಗನೆ ಚುರುಕಾಗಿ, ಏನೋ ಇರಬಹುದೆಂದು ದಿಟ್ಟಿಸಿ ನೋಡಿದ. ನೀಲಿ ಹಸಿರಿನ ಸಣ್ಣ ಪೊದೆಯೊಂದು ಹುಲ್ಲಿನ ನಡುವೆ ಹುಲ್ಲನು ಪಕ್ಕಕ್ಕೆ ಸರಿಸಿ ಮುಂದೆ ನಡೆದಂತೆ ಕಂಡು ದಿಗ್ಭ್ರಾಂತನಾಗಿ ಕಣ್ಣುಗಳನ್ನು ದಪ್ಪಗೆ ಅಗಲಿಸಿ ನೋಡಿದಾಗಲೇ ತಿಳಿದಿದ್ದು, ನವಿಲೊಂದು ಹುಲ್ಲಿನ ಮಧ್ಯೆ ಇರೋದು. ಮುಖದಲ್ಲಿರುವ ಭಯವೆಲ್ಲ ತಣ್ಣಗಾಗಿ, ತನ್ನ ಹೆಗಲ ಮೇಲಿದ್ದ ಟವಲಿನಿಂದ ನೆತ್ತಿಯಲ್ಲಿ ಇಳಿಯುತ್ತಿದ್ದ ಬೆವರನ್ನು ಒರೆಸಿಕೊಂಡು, ಆದರೂ ಅನುಮಾನದಿಂದಲೆ ಎಮ್ಮೆಗಳನ್ನು *"ಅಚ್ಚ. . .ಅಚ್ಚ. . .ಏ. . ."* ಎಂದು ಗದರಿದ. ನವಿಲು ಇದ್ದಕ್ಕಿದ್ದ ಹಾಗೆ ಪಟಪಟ ಎಂದು ರೆಕ್ಕೆಯನ್ನು ಬಡಿಯುತ್ತ ಹಾರಿ ದೂರಕ್ಕೆ ಹೋಯಿತು.




ಮರಿಗನಿಗೆ ಹಂದಿ ಜಾಡು, ಮೊಲದ ಗೂಡು, ಉಡದ ಬಿಲಗಳೇ ಮಾತ್ರವಲ್ಲ ಎಲ್ಲಾ ಕಾಡು ಪ್ರಾಣಿ-ಪಕ್ಷಿಗಳ ಬಿಹೇವಿಯರ್, ಹ್ಯಾಬಿಟ್ಯಾಟ್ ಎಲ್ಲವೂ ಗೊತ್ತು ಬಿಡಿ!, ಹುಲ್ಲಿನ ಮಧ್ಯದಿಂದ ಪಟಪಟ ಎಂದು ಹಾರಿದ ನವಿಲನ್ನು ನೋಡಿಯೇ ಇಲ್ಲಿ ನವಿಲು ಗೂಡುಮಾಡಿ ಮೊಟ್ಟೆ ಇಟ್ಟಿದೆ ಎಂದು ಖಾತ್ರಿಯಾಗಿ ಸೀದಾ ಹೋಗಿ ನೋಡಿದ. ಹುಲ್ಲನ್ನು ತನ್ನ ಕಾಲಿನಿಂದ ಕೆದರಿ ನೋಡಿದಾಗ ಮಣ್ಣಿನ ನಡುವೆ ಕೆನೆ ಬಣ್ಣದ ನಾಲ್ಕು ಮೊಟ್ಟೆಗಳನ್ನು ಇಟ್ಟಿತ್ತು. ಮರಿಗನ ಖುಷಿಗೆ ಆ ಗುಂಗುರು ಕೂದಲು ಕಷ್ಟಪಟ್ಟು ಸ್ವಲ್ಪ ಹಿಗ್ಗಿ, ಗೋಧಿ-ಎಣ್ಣೆ ಮೈ ಬಣ್ಣದ ಮುಖ ಅಗಲಿಸಿ ತನ್ನ ಮೊಣ ಕೈಗಳನ್ನು ಮೊಣ ಕಾಲಿನ ಮೇಲೆ ಊರಿಸಿ ಕುಳಿತುಕೊಂಡು ಒಂದು ಸಾರಿ ತಲೆಯನ್ನು ಮೇಲಕ್ಕೆತ್ತಿ ಮನೆಯಲ್ಲಿ ಕಾವಿಗೆ ಹಾಕಿದ್ದ ಕರಿಕೋಳಿಯನ್ನು ನೆನೆದು ತನ್ನ ಹೆಗಲ ಮೇಲಿದ್ದ ಟವಲನ್ನು ನೆಲದ ಮೇಲೆ ಹಾಸಿ ಒಂದೊಂದೆ ಮೊಟ್ಟೆಯನ್ನು ಜೋಪಾನವಾಗಿ ಎತ್ತಿಟ್ಟು,

ಟವಲನ್ನು ಗಂಟುಹಾಕಿ, ಹೆಗಲಿಗೇರಿಸಿ ತನ್ನ ಕೈಯಿಂದ ಹಿಡಿದು, ಕತ್ತಿನಿಂದ ಬಿಗಿಯಾಗಿ ಒತ್ತರಿಸಿಕೊಂಡು ಸಂಜೆಯವರಿಗೂ ಎಮ್ಮೆಗಳ ಹಿಂದೆ ಸುತ್ತಾಡಿಕೊಂಡು ಸಂಜೆ ಹಾಲು ಕರೆಯುವ ಹೊತ್ತಿಗೆ ಎಮ್ಮೆಗಳನ್ನು ಅಟ್ಟಿಕೊಂಡು ಕಾಡು ಓಣಿಯಲ್ಲಿ ದಪದಪನೇ ನಡೆಯುತ್ತಿದ್ದ.

ದೂರದ ಟವರ್ ಮೇಲೆ ಕುಳಿತಿದ್ದ ಫಾರೆಸ್ಟ್ ವಾಚರ್ ಗುಟ್ಟಿಗೆ ನಿಜವಾದ ಸಿನಿಮಾದಂತೆಯೇ ಆ ಗೋದುಳಿಯ ದೃಶ್ಯ ಬೇರೆಯೊಂದು ಲೋಕಕ್ಕೆ ಕರೆದುಕೊಂಡು ಹೋಗುವಂತೆ ಇತ್ತು. ಹಿಂದೆಯೆಲ್ಲ ಹಸಿರಿನ ಕಾಡು ಸೂರ್ಯನ ರಶ್ಮಿಗೆ ಮಂಕಾಗಿ ಎಮ್ಮೆಗಳು ದಾರಿಯ ಅಕ್ಕ-ಪಕ್ಕದ ಲಂಟನ ಬೇಲಿಗೆ ತನ್ನ ಬೆನ್ನನ್ನು ಉಜ್ಜಿಕೊಂಡು ಹೋಗುವ ರಭಸಕ್ಕೆ ಆ ಬೇಸಿಗೆಯ ಧೂಳು ಚಿನ್ನದ ಹೊಗೆಯಂತೆ ಮುಗಿಲೆತ್ತರಕ್ಕೆ ಹಾರಿ,  ಹಿಂದೆ ಬರುತ್ತಿದ್ದ ಮರಿಗನನ್ನು ದೇವಲೋಕದ ಯಮಧರ್ಮರಾಜನಂತೆ ಒಂದು ಕೈಯಲ್ಲಿ ಬಿದಿರಿನ ಸಣ್ಣದೊಂದು ಕೋಲು, ಹೆಗಲ ಮೇಲೆ ಮೊಟ್ಟೆಗಳನ್ನು ಕಟ್ಟಿರುವ ಟವಲಿನ ಒಂದು ತುದಿಯನ್ನು ಗ್ರಿಪ್ಪಿಗಾಗಿ ಬಾಯಲ್ಲಿ ಕಚ್ಚಿಕೊಂಡು *"ಏ. . .ಏ. . .ಬಾ. . .ಬಾ. . . ಇತ್ತ. ವಾಂಯ್ಯೋ ವಾಂಯ್ಯ"* ಎಂದು ಕೂಗಾಡುತ್ತಾ ಬರುವುದನ್ನು ನೋಡಿ ಸರಸರನೇ ಟವರಿನಿಂದ ಇಳಿದು ಬಂದು ಮರಿಗನಿಗೆ ಅಡ್ಡಲಾಗಿ ನಿಂತು *"ಏನ್ ಮರಿಗಣ್ಣ ಇಂಗೆ ದಿನಾಲೂ ಬಿದ್ರುಕಳ್ಳೆ ಟವಲಿನಲ್ಲಿ ಕಟ್ಕೊಂಡು ಸಾಗಿಸುತ್ತಿದ್ದರೆ ಹೇಗೆ, ಸಾಯಬ್ರು ನನ್ನನ್ನು ಕೆಲ್ಸದಿಂದ ತೆಗೆದು ಮನೆಗೆ ಕಳಿಸ್ತಾರೆ ಅಷ್ಟೆ!"* ಎಂದ. *"ಏ ಇಲ್ಲ ಗುಟ್ಟಿ ಟವಲ್ನಾಗ. . .! ಅಲ್ಲಿ ಕಾಡ್ಕೋಳಿ ಮೊಟ್ಟೆ ಸಿಕ್ತು, ನಮ್ಮನೆಗ ಕರಿಕೋಳಿ ಕಾವುಕುಳ್ತದೆ, ಅದ್ರಲ್ಲಿ ಹಾಕಾನ ಅಂಥ ತಗೊಂಡೋಕ್ತ ಇದ್ದೀನಿ"* ಎಂದ. ಇನ್ನೂ ಏನೇನೊ ಕೇಳ್ತನೋ ಎಂದು ಸರಸರನೇ ಎಮ್ಮೆಗಳನ್ನು ಅಟ್ಟಿಸುವ ನೆಪದಲ್ಲಿ ಹೊರಟ. ಈ ಫಾರಿಸ್ಟ್ರು ವಾಚರ್ ಗುಟ್ಟಿಗೆ ಬಿದಿರುಕಳ್ಳೆ ಕಾಡಿಂದ ತಗೊಂಡ್ ಹೋಗೋದು ಅಪರಾಧ, ಆದ್ರೆ ಕಾಡುಕೋಳಿ ಮೊಟ್ಟೆನಾ ಇಂಥ ನ್ಯಾಷನಲ್ ಪಾರ್ಕಿಂದ ತಗೊಂಡು ಹೋಗೋದು ಅಪರಾಧ ಅಂಥ ಹೊಳಿಲೇ ಇಲ್ಲ ಬಿಡಿ!.

ಗುಟ್ಟಿ ತಲೆ ಕೆರಕೊಂಡು ವಾಪಸ್ಸ್ ಹೋಗಿ ಟವರಿನ ಮೇಲೆ ಕುಳಿತುಕೊಂಡು ಆ ಕಡೆ ಪಶ್ಚಿಮದ ಚಿಕ್ಕರಾಗಳ್ಳಿ ಗುಟ್ಟದ ಹಿಂದೆ ಮುಳುಗುತ್ತಿದ್ದ ಸೂರ್ಯನನ್ನು ನೋಡುತ್ತಾ, ಈ ಕಡೆ ಮರಿಗನು ತನ್ನ ಎಮ್ಮೆಗಳ ಜೊತೆ ಹಟ್ಟಿಕಡೆ ಹೊರಡುವ ದೃಶ್ಯ ದೂರದ ಕತ್ತಲಿನ ಮುಸಿಕಿನಲ್ಲಿ ಲೀನಾವಾಗುತ್ತಾ ಮಾಯಾವಾಗಿ ಹೋದ, ದೂರದಲ್ಲೆಲ್ಲೊ ನವಿಲುಗಳ *"ಕ್ಯೇ. .ಓ. . . ಕ್ಯೇ. .ಓ. . . ಕ್ಯೇ. .ಓ. . . "* ಎಂಬ ಶಬ್ಧ ಕೇಳುತ್ತಿತ್ತು.






ಹಟ್ಟಿಗೆ ಬಂದ ಮರಿಗ ಎಮ್ಮೆಗಳನ್ನು ದೊಡ್ಡಿಯಲ್ಲಿ ಕೂಡಿ ಹಾಕಿ, ಕರಿಕೋಳಿಗೆ ಕಾಣದಂತೆ ಕಾಡಿನಿಂದ ತಂದಿದ್ದ ನವಿಲಿನ ಮೊಟ್ಟೆಗಳನ್ನು ಮೆತ್ತಗೆ ಮೆಲ್ಲನೆ ಕರಿಕೋಳಿಯ ಮೊಟ್ಟೆಗಳ ಜೊತೆ ಸೇರಿಸಿದ. ಸ್ವಲ್ಪ ದಿನಗಳಾದ ಮೇಲೆ ಮರಿಗನಿಗೆ ಪೀಕಲಾಟಕ್ಕೆ ಬಂತು, ಕೋಳಿ ಮೊಟ್ಟೆಗಳೆಲ್ಲಾ ಒಡೆದು ಮರಿಗಳು ಹೊರಕ್ಕೆ ಬಂದು ನಾಕೈದು ದಿನವಾದರೂ ನವಿಲು ಮೊಟ್ಟೆ ಒಡೆಯಲೇ ಇಲ್ಲ, ಕೋಳಿಯ ಮರಿಗಳು ತನ್ನ ತಾಯಿಯನ್ನು ಬಿಟ್ಟು ಹೊರಕ್ಕೆ ಬಂದು ಮನೆಯೆಲ್ಲ ತಿರುಗಾಡ ತೊಡಗಿದವು, ಮರಿಗನ ಕರಿಕೋಳಿ ಇತ್ತ ಈ ನಾಲ್ಕು ಮೊಟ್ಟೆಗಳನ್ನು ಬಿಡಲಾಗದೆ, ಅತ್ತ ಮರಿಗಳನ್ನು ಬಿಡಲಾಗದೆ "*ಕೊಕ್. . . ಕೊಕ್. . . ಕೊಕ್. . .*" ಎಂದು ರಾತ್ರಿ-ಹಗಲು ಎನ್ನದೆ ಕೂಗಾಡಲು ಶುರುವಾಯಿತು. ಮರಿಗನಿಗೆ ಚಿಟ್ಟು ಹಿಡಿದು "*ಇದ್ರ ಮನೆಕಾಯೋಗ, ಯಾಕಾದ್ರು ಈ ಮೊಟ್ಟೆಗಳನ್ನು ತಂದ್ನೋ*" ಎಂದು ಬಯ್ದುಕೊಳ್ಳುತ್ತಿದ್ದ. ವಾರದ ಮೇಲೆ ನವಿಲಿನ ಎರಡು ಮೊಟ್ಟೆಗಳು ಒಡೆದು ಮರಿಗಳಾಗಿ ಹೊರಬಂದವು ಇನ್ನೂ ಎರಡು ಮೊಟ್ಟೆಗಳು ಊಳೆಯಾಗಿ ಉಳಿದುಕೊಂಡವು.

ಒಮ್ಮೆ ಮರಿಗ ಗುಟ್ಟಿಗೆ ಎದುರಾದಾಗ "*ಏನ್ ಮರಿಗಣ್ಣ ನಿನ್ ಮೊಟ್ಟೆಗ್ಳು ಮರಿಗಳಾದ್ವ?*" ಎಂದು ಕೇಳಿದ. "*ಏ ಅದೇನೋ ಸರಿ ಇಲ್ಲ ಗುಟ್ಟಿ. ನಾಲ್ಕ್ ಮೊಟ್ಟೇಲಿ ಬರಿ ಎರಡು ಮಾತ್ರ ಮರಿ ಮಾಡ್ತು, ಇನ್ನೆರಡು ಆಗೇ ಇಲ್ಲ*" ಎಂದ. "*ಅಲ್ಲ ಮರಿಗಣ್ಣ ಅವು ಯಾಗಾಯ್ತುವೆ ಹೇಳು ಮಾರಾಯ, ಕೋಳಿ ಮೊಟ್ಟೆ ಒಡೆದು ಮರಿಮಾಡಕೆ ಇಪ್ಪತ್ತೊಂದು ದಿನ ಬೇಕು!, ಈ ನವಿಲು ಮೊಟ್ಟೆ ಮರಿಯಾಗಕೆ ಒಂದು ತಿಂಗ್ಳು ಬೇಕು!, ಒಟ್ಗೆ ಎಲ್ಲಾ ಮರಿ ಆಗಬೇಕು ಅಂದ್ರೆ ಎಲ್ಲಿಂದ ಆತದೆ*" ಎಂದು ತನ್ನ ಕಾಡಿನ ಅನುಭವದ ಬುದ್ಧಿವಂತಿಕೆಯನ್ನು ಮರಿಗನ ಮುಂದೆ ಪ್ರದರ್ಶಿಸಿದ.

ಕೋಳಿಯಂತೂ ಮರಿಗಳನ್ನು ತುಂಬ ಜೋಪಾನದಿಂದಲೇ ನೋಡಿಕೊಳ್ಳುತ್ತಿತ್ತು. ಮರಿಗನ ಹಿತ್ತಲಿನ ಕಡೆ ಇರುವ ಬೇಲಿಗಳ ಕೆಳಗೆ ಒಣ ಎಲೆಗಳನ್ನು, ಮಣ್ಣನ್ನು ಕೆದಕುತ್ತಾ ತನ್ನ ಮರಿಗಳಿಗೆ ಆಹಾರವನ್ನು ಹುಡುಕಿಕೊಡುತ್ತಿತ್ತು. ಕೋಳಿಪಿಳ್ಳೆಗಳಿಗಿಂತ ಈ ನವಿಲು ಮರಿಗಳು ಬಕಸೂರರಂತೆ ಬಕಬಕ ಎಂದು ಬುಕ್ಕಿ ಕೋಳಿ ಮರಿಗಳಿಗಿಂತ ದಪ್ಪದಾಗಿ ದುಪ್ಪಟ್ಟಾಗಿದ್ದವು ಗಾತ್ರದಲ್ಲಿ. ಕೋಳಿಗಳ ಜೊತೆಯಲ್ಲಿ ಮೇಯುತ್ತಾ ದೊಡ್ಡ ದೊಡ್ಡ ನವಿಲುಗಳಾಗಿ ನಾಕೈದು ಕೋಳಿಗೆ ಒಂದು ನವಿಲು ಸಮ ಎಂಬಂತೆ ದಷ್ಟಪುಷ್ಟವಾಗಿ ಬೆಳೆದ ಮಿರುಗುವ ಹಸಿರು ಮಿಶ್ರಿತ ಕಡು ನೀಲಿ ಬಣ್ಣದ ನವಿಲುಗಳು, ನೆತ್ತಿಯ ಮೇಲೆ ಕುಚ್ಚು, ಹಲವು ಬಣ್ಣಗಳಿಂದ ಕೂಡಿದ ಉದ್ದವಾದ ಬಾಲ, ಗರಿಗಳು ಅಗಲಿಸಿ ನರ್ತಿಸಿದರೆ ನೋಡಲು ಎರಡು ಕಣ್ಣುಗಳು ಸಾಲದು. ಇವುಗಳು ನಮ್ಮ ದೇಶದ ರಾಷ್ಟ್ರಪಕ್ಷಿ ಎಂದರೆ ಹೆಮ್ಮೆಯಾಗಬೇಕು ನಮಗೆಲ್ಲ.

ಸಂಜೆಯಾಯಿತೆಂದರೆ ಕಾಡು ಪಕ್ಕದ ಹೆಗ್ಗಡೆಯ ತೋಟದ ಬೇಲಿಗೆಂದು ಬೆಳೆಸಿದ ಸಿಲ್ವರ್ ಮರಗಳ ಮೇಲೆಲ್ಲ ಕಾಡು ನವಿಲುಗಳು ಬಂದು, ಆ ವಿಶಾಲವಾದ ಕಾಡನ್ನು ಎತ್ತರದಿಂದ ನೋಡುತ್ತಾ ಕೇಕೆ ಹಾಕುತ್ತಾ. . .! ಗುಂಪುಗಳಲ್ಲಿ ಸೇರಿ ಕುಶಲೋಪರಿಯನ್ನು ಮಾತನಾಡುತ್ತಾ, ಆ ವರ್ಣಮಯ ಮುಸ್ಸಂಜೆಯನ್ನು ಅನುಭವಿಸುತ್ತ ಕತ್ತಲಾದ ಮೇಲೆ ಅಲ್ಲೆ ಮರಗಳ ಮೇಲೆ ಕುಳಿತು, ರಾತ್ರಿಯೆಲ್ಲ ಅಲ್ಲಿಯೇ ತಂಗಿಕೊಳ್ಳುತ್ತವೆ. ಹೆಗ್ಗಡೆಯ ತೋಟದ ಆಳು ನಾಚೇರಿಯ ಕಣ್ಣಿಗೆ ಬಿದ್ದ ನವಿಲುಗಳು, ತಿಂಗಳಲ್ಲಿ ಒಂದೆರಡು ಬಾರಿ ಮಸಾಲೆಯನ್ನು ಅರೆದಿದ್ದ. ಮರಿಗನ ಈ ನವಿಲುಗಳು ಹೇಗೋ ಮಾಡಿ ಈ ಕಾಡು ನವಿಲುಗಳ ಜೊತೆ ಸಂಘಮಾಡಿ, ಅವುಗಳ ಜೊತೆ ಕೂಡಲೂ ಹೋಗಿದವೋ ಏನೋ. . .!, ನಾಚೇರಿಯ ಕೋವಿ ಈಡಿನ ಒಂದೇ ಏಟಿಗೆ ಬಿದ್ದು, ನಾಚೇರಿಯ ಗೆಳೆಯರಿಗೆಲ್ಲ ಔತಣ ಕೂಟವಾದವು, ಮರಿಗನಿಗೆ ನವಿಲುಗಳನ್ನು ಉಳಿಸಿಕೊಳ್ಳಲಾಗಲ್ಲಿಲ್ಲ ಎಂಬುದಕ್ಕಿಂತ, ನಾನು ದಷ್ಟಪುಷ್ಟವಾಗಿ ಬೆಳೆಸಿದ ನವಿಲುಗಳನ್ನು ನಾನು ತಿನ್ನಲು ಆಗಲಿಲ್ಲವಲ್ಲ ಎಂಬ ಬೇಸರ.



ಗುಟ್ಟೆಯಂತಹ ಫಾರೆಸ್ಟ್ ವಾಚರುಗಳಿಂದ ಕಾಡಿನ ಸಂರಕ್ಷಣೆ ಎಷ್ಟರ ಮಟ್ಟಿಗಿರಬೇಕು, ಕಾಡಿನ ಸುತ್ತಮುತ್ತಲಿರುವ ಹಳ್ಳಿಗಳ ಇಂತಹ ಜನ ಸಮುದಾಯಗಳಿಗೆ ಕಾಡಿನ ಕಾಳಜಿ ಹೇಗಿರಬೇಕು ಎಂಬುದನ್ನು ಒಮ್ಮೆ ನಾವು ನೀವು ಎಲ್ಲಾ ಯೋಚಿಸಬೇಕು!.

- **ಅಶ್ವಥ ಕೆ.ಎನ್**



# ಹೋರಾಟ

ಕುದಿಯುತ್ತಿರುವ ಸಾರಿಗೆ ಏನೋ ಕಡಿಮೆಯಾದಂತನಿಸಿತು. ಕೊತ್ತಂಬರಿ ಸೊಪ್ಪೇ ಹಾಕಿರಲಿಲ್ಲ. ಅದನ್ನು ತರಲು ಅಂಗಳದ ಮೂಲೆಯ ಕೈತೋಟದ ಕಡೆಗೆ ಹೆಜ್ಜೆ ಹಾಕುತ್ತಿದ್ದೆ. ಪಕ್ಕನೇ ಎರಡು ದೊಡ್ಡ ಜಾತಿಯ ಕಡು ಕಪ್ಪು ಬಣ್ಣದ ಇರುವೆಗಳು ಕಣ್ಣು ಸೆಳೆದವು. ಇರುವೆಗಳ ಸಹಕಾರೀ ಗುಣ, ಶಿಸ್ತು, ಕಾರ್ಯ ಚಟುವಟಿಕೆಗಳ ಬಗ್ಗೆ ಮಾತ್ರ ತಿಳಿದಿದ್ದ ನನಗೆ ಇವುಗಳು ಕಾಳಗಕ್ಕೆ ಸಿದ್ಧರಾದಂತೆ ಎದುರು ಬದುರು ನಿಂತಿರುವ ರೀತಿ ಹೊಸದಾಗಿ ತೋರಿತು.



ಹೊರಟ ಕೆಲಸ ಮರೆತು ಅವುಗಳತ್ತಲೇ ನೋಡುತ್ತಾ ನಿಂತೆ. ನಾನು ಅಂದುಕೊಂಡಿದ್ದು ನಿಜವಾಗಿತ್ತು. ಅವು ಹತ್ತಿರ ಬಂದು ಬಲಾಬಲಗಳ ಪರೀಕ್ಷೆ ಮಾಡುವಂತೆ ಕೈಯಿಂದ ಕಾಲಿನಿಂದ ಪರಸ್ಪರ ದೂಡಿಕೊಳ್ಳುತ್ತಿದ್ದವು.



ಇದ್ದಕ್ಕಿದ್ದಂತೆ ಒಂದು ಇರುವೆ ಪಕ್ಕದ ಗೋಡೆಯ ಮೇಲೆ ಹತ್ತಿ ಅಲ್ಲಿಂದ ಕೆಳಗಿದ್ದ ಇರುವೆಯ ಮೇಲೆ ನೆಗೆದು ಅದನ್ನು ಕೆಡವಿತು. ಬಲವಾಗಿ ಒಂದನ್ನೊಂದು ಗಟ್ಟಿ ಹಿಡಿದುಕೊಂಡು ಉಂಡೆಯಾಕಾರದಂತೆ ಅತ್ತಿಂದಿತ್ತ ಉರುಳಿ ತಮ್ಮ ಚೂಪಾದ ಕೊಂಡಿಗಳಲ್ಲಿ ಚುಚ್ಚಿಕೊಳ್ಳುತ್ತಿದ್ದವು.




ಬೀದಿ ನಾಯಿಗಳ ಜಗಳ ನೋಡಿ ಅಭ್ಯಾಸವಿದ್ದ ನನಗೆ, ಅವುಗಳಂತೆ ಇವು ಕೂಡಾ ಒಂದು ಶರಣಾಗತಿಯನ್ನು ಸೂಚಿಸುತ್ತಾ ನಿಂತರೆ ಇನ್ನೊಂದು ಅದನ್ನು ಬಿಟ್ಟು ಹೋಗುಬಹುದು ಎಂದುಕೊಂಡು, ಮಾಡಬೇಕಿದ್ದ ಕೆಲಸ ನೆನಪಿಸಿಕೊಂಡು ಅಲ್ಲಿಂದ ಕಾಲ್ತೆಗೆದೆ.

ಸ್ವಲ್ಪ ಹೊತ್ತು ಕಳೆದು ಪುನಃ ಕುತೂಹಲದಿಂದ ಆ ಜಾಗಕ್ಕೆ ಬಂದು ಪರೀಕ್ಷಿಸಿದೆ. ಎರಡೂ ಇರುವೆಗಳು ಅತ್ಯಂತ ಪ್ರೀತಿಪಾತ್ರರಂತೆ ಒಂದನ್ನೊಂದು ಅಪ್ಪಿಕೊಂಡು ಸತ್ತು ಬಿದ್ದಿದ್ದವು.




ಸಾಲಾಗಿ ಬರುತ್ತಿದ್ದ ಇನ್ನೊಂದು ಜಾತಿಯ ಚಿಕ್ಕ ಇರುವೆಗಳ ಸಾಲು ಅವುಗಳನ್ನು ತಮ್ಮ ಆಹಾರವೆಂಬಂತೆ ಗೂಡಿಗೆ ಹೊತ್ತೊಯ್ಯಲು ಪ್ರಯತ್ನಿಸುತ್ತಿರುವುದು ಯಾಕೋ ಶವ ಮೆರವಣಿಗೆಯಂತೆ ತೋರಿತು.

ಇಬ್ಬರ ಜಗಳ ಮೂರನೆಯವನಿಗೆ ಲಾಭ ಎಂಬ ಮಾತೆಷ್ಟು ನಿಜ. . !!.

- ಅನಿತಾ ನರೇಶ್ ಮಂಚಿ

ದಕ್ಷಿಣ ಕನ್ನಡ ಜಿಲ್ಲೆ.



ವಿವಿ ಅಂಕಣ

# ವಿದ್ಯಾರ್ಥಿಗಾಗಿ ವಿಜ್ಞಾನ

## * ಬ್ಲಾಕ್ ಹೋಲ್



‘***ಆಂಡ್ರೊಮಿಡಾ***’ ನಮ್ಮ ಭೂಮಿಗೆ ಅತ್ಯಂತ ಸಮೀಪದಲ್ಲಿರುವ ***ಗ್ಯಾಲಕ್ಸಿ***. ಇದು ಭೂಮಿಯಿಂದ ಕೇವಲ 2.5 ಮಿಲಿಯನ್ ***ಜ್ಯೋತಿರ್ವರ್ಷ*** ದೂರದಲ್ಲಿದೆ!. ಇಷ್ಟು ದೂರದಲ್ಲಿರುವ ಗ್ಯಾಲಕ್ಸಿಯಲ್ಲಿ ಖಗೋಳ ವಿಜ್ಞಾನಿಗಳು ಇತ್ತೀಚೆಗೆ 26 ಹೊಸ ‘***ಬ್ಲಾಕ್ ಹೋಲ್***’ಗಳನ್ನು ಪತ್ತೆಹಚ್ಚಿದ್ದಾರೆ.

ಬ್ಲಾಕ್ ಹೋಲ್ಗಳು ಯಾವುದೇ ಬೆಳಕನ್ನು ಹೊರಸೂಸುವುದಿಲ್ಲವಾದರು, ಅವುಗಳ ಪರಿದೆಯಿಂದ ಬರುವ ಪ್ರಭಲ X-Ray ಕಿರಣಗಳಿಂದ ***ಬ್ಲಾಕ್ ಹೋಲ್*** ಇದೆ ಎಂದು ಪರೋಕ್ಷವಾಗಿ ತಿಳಿಯಬಹುದು.

ನಮ್ಮ ಭೂಮಿಯ ಸುತ್ತಮುತ್ತ ಇರುವ ಗ್ಯಾಲಕ್ಸಿಗಳಲ್ಲಿ M31 ಬಹುದೊಡ್ಡದು. ಮತ್ತು ಅದರಲ್ಲಿರುವ ಬ್ಲಾಕ್ ಹೋಲ್ಗಳ ಸಂಖ್ಯೆಯಾಲ್ಲೂ ಅದು ಪ್ರಥಮ ಸ್ಥಾನ ಪಡೆದಂತಾಗಿದೆ.

**ಬ್ಲಾಕ್ ಹೋಲ್ :** ಸತ್ತಿರುವ ಬಾರಿ ನಕ್ಷತ್ರದ ಪಳೆಯುಳಿಕೆ, ಇದು ತನ್ನೆಡೆಗೆ ಬರುವ ಎಲ್ಲಾ ವಸ್ತುಗಳನ್ನು ನುಂಗಿಕೊಳ್ಳುತ್ತದೆ. ಬೆಳಕನ್ನು ಕೂಡ ಹೊರ ಹೋಗಲು ಬಿಡುವುದಿಲ್ಲ.

**ಜ್ಯೋತಿರ್ವರ್ಷ :** ಒಂದು ಸೆಕೆಂಡಿಗೆ ಮೂರು ಲಕ್ಷ ಕೀಲೋ ಮೀಟರ್ ವೇಗದಲ್ಲಿ ಬೆಳಕು ಚಲಿಸಿ ಒಂದು ವರ್ಷದಲ್ಲಿ ಆ ಬೆಳಕು ಚಲಿಸುವ ದೂರ.

**ಗ್ಯಾಲಕ್ಸಿ :** ಬಿಲಿಯನ್ ಬಿಲಿಯನ್ ನಕ್ಷತ್ರಗಳ ಗುಂಪು.





- ಶಂಕರಪ್ಪ.ಕೆ.ಪಿ

# ತೋಟದ ಮನೆಯ ಹಕ್ಕಿಯ ಗೂಡು



ಅಂದ ಚಂದದಿ ಬಂದಿತು
ಪುಟ್ಟಹಕ್ಕಿ ತನ್ನ ಗೂಡಿಗೆ
ಸಂಗಾತಿ ಜೊತೆ ಸೇರಿ
ಇಂಪಾದ ಗಾನ ವಾಡಿತು ಪ್ರಿಯವಾಗಲೆಂದು.

ಅಂಗಳದ ತುಂಬೆಲ್ಲಾ ಹಸಿರಿತ್ತು
ನೀಲಾಂಬರದಿ ರಮಣೀಯ ಹೂವಿತ್ತು.
ಸೊಗಸಾಗಿ ನಲಿದಾಡೋ ಪುಟ್ಟ ಜೀವಕೆ
ಸಂಗಾತಿಯ ಒಲವಿತ್ತು ಮಿಲನಕೆಂದು.



ಸದ್ದು ಗದ್ದಲವಿಲ್ಲ ಇಂದೆನಗೆ
ತೋಟದ ಮನೆಯ ಏಕಾಂತದೊಳಗೆ
ಹಕ್ಕಿ ಬಂದು ಯನ್ನ ಕೇಳಿತು ಹಸಿವಾಯಿತೆಂದು
ಕೊಂಡು ಹೋಗು ನಿನ್ನದೆಂದು.

ಚಿಲಿಪಿಲಿ ಸದ್ದು ಕೇಳುತಾವಿಂದು
ಕಾಳ ನಾದಿ ಗೂಡಿನೊಳಗೆ ಪೋಷಿಸಲು
ನಿನ್ನ ಪ್ರೀತಿ ಫಲಿಸಿತೆಂದು  ಹೊಸ ಜೀವ ನಿನ್ನಂತಿಹುದು
ದೂರ ಹೋಗಿ ಬಕದ ಬಾಯಸೇರ ಬೇಡ, ನನ್ನ ಜೀವಕೆ ಯಾರಿಂದು.

- ಕೃಷ್ಣ ನಾಯಕ್

